## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1908**
2. ಮಾನ್ಯ ಸದಸ್ಯರ ಹೆಸರು : **ಶ್ರೀ ಪ್ರಕಾಶ್.ಕೆ.ರಾಥೋಡ್**
3. ಉತ್ತರಿಸಬೇಕಾದ ದಿನಾಂಕ : **23.03.2021**
4. ಉತ್ತರಿಸುವ ಸಚಿವರು : **ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು**

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿರುವ ಸಕ್ಕರೆ ಕಾರ್ಖಾನೆಗಳಿಗೆ ಮಿನಿಮಮ್ ಸೆಲ್ಲಿಂಗ್ ಪ್ರೈಸ್ ಎಷ್ಟು; | ಕೇಂದ್ರ ಸರ್ಕಾರದ ಆದೇಶದ ಸಂಖ್ಯೆ: ಎಸ್.ಓ.874 (ಇ) ದಿನಾಂಕ: 14.02.2019ರ ರೀತ್ಯಾ ಸಕ್ಕರೆ ಕಾರ್ಖಾನೆಗಳು ಮುಕ್ತ ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ಸಕ್ಕರೆಯನ್ನು ಪ್ರತಿ ಕ್ವಿಂಟಾಲ್ ಒಂದಕ್ಕೆ ರೂ.3100/- ಕ್ಕಿಂತ ಕಡಿಮೆ ಬೆಲೆಗೆ ಮಾರಾಟ ಮಾಡದಂತೆ ನಿರ್ಬಂಧಿಸಿ ಆದೇಶಿಸಿರುತ್ತದೆ. |
| (ಆ) | ಹಲವು ಖಾಸಗಿ ಸಕ್ಕರೆ ಕಾರ್ಖಾನೆಗಳು ಎಂ.ಎಸ್.ಪಿ. ಗಿಂತ ಕಡಿಮೆ ದರದಲ್ಲಿ ಸಕ್ಕರೆ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೇಂದ್ರ ಸರ್ಕಾರವು ನಿಗದಿಪಡಿಸಿರುವ ಎಂ.ಎಸ್.ಪಿ. ದರಕ್ಕಿಂತ ಕಡಿಮೆ ದರಕ್ಕೆ ಸಕ್ಕರೆ ಮಾರಾಟ ಮಾಡಿರುವ ಬಗ್ಗೆ ಯಾವುದೇ ನಿರ್ದಿಷ್ಟ ದೂರುಗಳು ಬಂದಿರುವುದಿಲ್ಲ. ಈ ಸಂಬಂಧ ದೂರುಗಳು ಸ್ವೀಕೃತವಾದಲ್ಲಿ ಅಂತಹ ಕಾರ್ಖಾನೆಗಳ ವಿರುದ್ಧ ತಕ್ಷಣವೇ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು |
| (ಇ) | ಬಂದಿದ್ದಲ್ಲಿ, ಇದನ್ನು ತಡೆಯಲು ಸರ್ಕಾರ ಕೈಗೊಂಡಿರುವ ಕ್ರಮವೇನು? | |

ಸಂಖ್ಯೆ: ಸಿಐ 27 ಎಸ್‌ಜಿಎಫ್ 2021

(ಎನ್. ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು